ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಗುರುವಾರ,ದಿನಾಂಕ : 25ನೇ ಜುಲೈ, 2019

20. ಶಿವಮೊಗ್ಗ ಜಿಲ್ಲೆಯಲ್ಲಿ ಮರಳು ಗಣಿಗಾರಿಕೆ ಸಾಗಾಟದ ಕುರಿತು

ಶ್ರೀ ಆರ್. ಪ್ರಸನ್ನಕುಮಾರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

602 (623) ಮಾನ್ಯ ಗಣಿ ಮತ್ತು ಭೂ ವಿಜ್ಞಾನ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಶಿವಮೊಗ್ಗ ಜಿಲ್ಲೆಯ ಮರಳು ಗಣಿಗಾರಿಕೆ ಸಾಗಾಟದಲ್ಲಿ ಮರಳು ಮಾಫಿಯಾದ ಕೈವಾಡ ಹಾಗೂ ಗಣಿಗಾರಿಕೆಗೆ ಸಂಬಂಧಿಸಿದ ಅಧಿಕಾರಿ ಹಾಗೂ ಸಿಬ್ಬಂದಿ ನೇರವಾಗಿ ಶಾಮಿಲಾಗಿರುತ್ತಾರೆಂಬವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ ; (ವಿವರ ನೀಡುವುದು) ಶಿವಮೊಗ್ಗ ಜಿಲ್ಲೆಯ ಭೂ ವಿಜ್ಞಾನಿ ಇಲ್ಲಿಂದ ವರ್ಗಾವಣೆಗೊಂಡಿದ್ದರು ಸಹ ಇಲ್ಲಿಯೇ ಮುಂದುವರೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಇವರನ್ನು ವರ್ಗಾವಣೆಯಾಗಿರುವ ಸ್ಥಳಕ್ಕೆ ನಿಯುಕ್ತಿಗೊಳಿಸಲು ಸರ್ಕಾರ ಏನು ಕ್ರಮ ಕೈಗೊಂಡಿರುತ್ತದೆ;

(ಆ) ಶಿವಮೊಗ್ಗ ಜಿಲ್ಲೆಯಲ್ಲಿ ಇಲ್ಲಿಯವರೆಗೆ ಯಾವ ಕ್ವಾರಿಗಳಿಗೆ ಅನುಮತಿ ನೀಡಿರುತ್ತದೆ ; ಎಷ್ಟು ಪ್ರಮಾಣದಲ್ಲಿ ಮರಳು ರಫ್ತು ಮಾಡಿರುತ್ತಾರೆ ; (ಸಂಬಂಧಿಸಿದವರಿಗೆ ಪಾಸು ವಿತರಣೆ ಮಾಡಿದ ವಿವರದ ಸವಿಸ್ತಾರ ವರದಿ ನೀಡುವುದು)

(ಇ) ಮರಳು ತೆಗೆಯಲು ಟೆಂಡರ್ ಪಡೆದಿರುವ ಗುತ್ತಿಗೆದಾರರು ಟೆಂಡರ್ ನಿಯಮವನ್ನು ಪಾಲಿಸದೆ ಇರುವುದು ಹಾಗೂ ಇದರಲ್ಲಿ ಇಲಾಖೆಯ ಅಧಿಕಾರಿಗಳು ಶಾಮೀಲಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮಗಳೇನು ;

(ಈ) ಮರಳು ತೆಗೆಯಲು ಜಿಲ್ಲೆಯ ಯಾವ ಸ್ಥಳದಲ್ಲಿ ಅನುಮತಿ ನೀಡಲಾಗಿರುತ್ತದೆ ; ಪ್ರತಿ ಕ್ವಾರಿಯಿಂದ ಪ್ರತಿ ತಿಂಗಳು ಎಷ್ಟು ಪ್ರಮಾಣದಲ್ಲಿ ಪ್ರತಿ ದಿವಸ ಮರಳು ರಫ್ತಾಗಿರುತ್ತದೆ ; ಎಲ್ಲಿಗೆ ರಫ್ತಾಗಿರುತ್ತದೆ ; (ಪಾಸು ನಂ. ಸಮೇತ ಜಿಲ್ಲಾವಾರು /ತಾಲ್ಲೂಕುವಾರು ಮಾರ್ಚ್ 2018 ರಿಂದ ಇಲ್ಲಿಯವರೆಗೆ ವಿವರ ನೀಡುವುದು)

(ಉ) ಸದರಿ ಮರಳು ಕ್ವಾರಿಗೆ ಅನುಮತಿಸಿರುವ ಸ್ಥಳದಿಂದ ನಿಯಮಬಾಹಿರವಾಗಿ ಮರಳು ರಫ್ತು ಮಾಡಿ ನಿಯಮ ಉಲ್ಲಂಘನೆ ಮಾಡುವವರಿಗೆ ಮತ್ತೆ ಅದೇ ಸ್ಥಳದಲ್ಲಿ ಅಧಿಕಾರಿಗಳೊಂದಿಗೆ ಶಾಮೀಲಾಗಿ ಮರಳು ರಫ್ತಿಗೆ ಅವಕಾಶ ಕೊಟ್ಟಿರುವುದು ಕಾನೂನು ಬಾಹಿರ ಅಲ್ಲವೇ ? (ವಿವರ ನೀಡುವುದು)